ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಶುಕ್ರವಾರ, ದಿನಾಂಕ: 11ನೇ ಡಿಸೆಂಬರ್, 2020

ಬೆಂಗಳೂರು ಮಹಾನಗರ ವ್ಯಾಪ್ತಿಯಲ್ಲಿ ಅನ್ಯ ರಾಜ್ಯದ ನೋಂದಾಯಿತ ವಾಹನಗಳ ಸಂಚಾರದ ನಿಯಮಗಳ ಕುರಿತು

ಶ್ರೀ ಪಿ.ಆರ್. ರಮೇಶ್ (ನಾಮನಿರ್ದೇಶನ ಹೊಂದಿದವರು):-

471(570) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಇತ್ತೀಚೆಗೆ ಬೆಂಗಳೂರು ಮಹಾನಗರ ವ್ಯಾಪ್ತಿಯ ರಸ್ತೆಗಳಲ್ಲಿ ಅನ್ಯ ರಾಜ್ಯದ ನೋಂದಾಯಿತ ವಾಹನಗಳ ಸಂಚಾರ ಹೆಚ್ಚಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು)

(ಆ) ಈ ಅನ್ಯ ರಾಜ್ಯ ನೋಂದಾಯಿತ ವಾಹನಗಳು ನಮ್ಮ ರಾಜ್ಯದ ರಸ್ತೆಗಳಲ್ಲಿ ಸಂಚಾರ ನಡೆಸಲು ಇರುವ ಮಾನದಂಡಗಳೇನು; (ವಿವರ ನೀಡುವುದು)

(ಇ) ಸದರಿ ಮಾನದಂಡಗಳನ್ನು ಉಲ್ಲಂಘನೆ ಮಾಡಿರುವ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಎಷ್ಟು ಪ್ರಕರಣಗಳನ್ನು ದಾಖಲಿಸಲಾಗಿದೆ ಮತ್ತು ಎಷ್ಟು ಮೊತ್ತದ ದಂಡವನ್ನು ವಸೂಲಾತಿ ಮಾಡಲಾಗಿದೆ; (ಕಳೆದ 5 ವರ್ಷಗಳ ವಿವರ ನೀಡುವುದು)

(ಈ) ಇಂತಹ ಪ್ರಕರಣಗಳನ್ನು ಪತ್ತೆ ಹಚ್ಚಲು ಸರ್ಕಾರದಿಂದ ಯಾವ ವ್ಯವಸ್ಥೆಯನ್ನು ಅಳವಡಿಸಿಕೊಂಡಿದೆ?(ಸಂಪೂರ್ಣ ಮಾಹಿತಿ ನೀಡುವುದು)